# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1671 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 14/03/2022 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ–ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು. |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಅನುದಾನ ರಹಿತ ಐ.ಟಿ.ಐ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಿದ್ದಲ್ಲಿ, ಸರ್ಕಾರಕ್ಕೆ ತಗುಲಬಹುದಾದ ಒಟ್ಟು ವೆಚ್ಚ ಎಷ್ಟು; ಈ ಕುರಿತು ಪ್ರಸ್ತಾವನೆಯು ಇಲಾಖೆಯಲ್ಲಿ ಚಾಲ್ತಿಯಲ್ಲಿದೆಯೇ; ಇದ್ದಲ್ಲಿ, ಪ್ರಸ್ತಾವನೆಯ ಸಂಪೂರ್ಣ ವಿವರವನ್ನು ಒದಗಿಸುವುದು; | ಅನುದಾನ ರಹಿತ ಐ.ಟಿ.ಐ. ಕಾಲೇಜುಗಳ ಸಿಬ್ಬಂದಿಯನ್ನು ಅನುದಾನಕ್ಕೆ ಒಳಪಡಿಸಿದಲ್ಲಿ ಸರ್ಕಾರಕ್ಕೆ ತಗಲುಬಹುದಾದ ಅಂದಾಜು ವೆಚ್ಚವು ವಾರ್ಷಿಕ ರೂ. **435** ಕೋಟಿಗಳಾಗುತ್ತದೆ. ಅನುದಾನ ರಹಿತ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಅನುದಾನಕ್ಕೊಳಪಡಿಸುವ ಪ್ರಸ್ತಾವನೆ ಚಾಲ್ತಿಯಲ್ಲಿರುವುದಿಲ್ಲ. |
| ಆ) | ಯಾವ ಕಾಲಮಿತಿಯ ಒಳಗೆ ಈ ಅನುದಾನ ರಹಿತ ಐ.ಟಿಐ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲಾಗುವುದು; | ಹೊಸದಾಗಿ ಯಾವುದೇ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸಿಬ್ಬಂದಿ ಆಧಾರಿತ ವೇತನಾನುದಾನ ಪದ್ಧತಿಗೆ ಒಳಪಡಿಸದಿರಲು ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಇಟಿಐ 2005, ದಿನಾಂಕ: 21.08.2010ರಲ್ಲಿ ನಿರ್ದೇಶಿಸಿರುವುದರಿಂದ, ಇನ್ನು ಮುಂದೆ ಯಾವುದೇ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ವೇತನ ಸಹಾಯಾನುದಾನಕ್ಕೆ ಒಳಪಡಿಸುವುದಿಲ್ಲ. |
| ಇ) | ಅನುದಾನಕ್ಕೆ ಒಳಪಡಿಸಲು ಇರುವ ಅನುದಾನ ಸಂಹಿತೆಯ ವಿವರವನ್ನು ಒದಗಿಸುವುದು; | ಸರ್ಕಾರದ ಆದೇಶ ಸಂಖ್ಯೆ: ಕಾಇ 45 ಇಟಿಐ 91, ಬೆಂಗಳೂರು, ದಿನಾಂಕ:15-11-1997 ರಲ್ಲಿ ವಿಧಿಸಲಾದ ಆರು ಷರತ್ತುಗಳಿಗೊಳಪಟ್ಟು Grant-in-aid code for Private Industrial Training Institutions in Karnataka 1997 ನ್ನು ಜಾರಿಗೊಳಿಸಲು ಸರ್ಕಾರವು ಅನುಮತಿಸಿದೆ. ರಾಷ್ಟ್ರೀಯ ವೃತ್ತಿ ಪರಿಷತ್‌ನಿಂದ (ಎನ್.ಸಿ.ವಿ.ಟಿ) 7 ವರ್ಷ ಅಥವಾ ಅದಕ್ಕೂ ಮೀರಿದಂತೆ ಸಂಯೋಜನೆ ಪಡೆದಿರುವ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ವೇತನ ಸಹಾಯಾನುದಾನ ನೀಡಲಾಗುವುದೆಂಬ ನಿಯಮವಿರುತ್ತದೆ. |

| | | |
|---|---|---|
| ಈ) | ಈ ಹಿಂದೆ ಯಾವಾಗ ಅನುದಾನಕ್ಕೆ ಒಳಪಡಿಸಲಾಗಿತ್ತು; ಯಾವ ಯಾವ ನಿಯಮಗಳನ್ವಯ ಅನುದಾನಕ್ಕೆ ಒಳಪಡಿಸಲಾಗಿದೆ; ಪ್ರಸ್ತುತ ಅನುದಾನ ರಹಿತ ಐ.ಟಿ.ಐ ಗಳನ್ನು ಅನುದಾನಕ್ಕೆ ಒಳಪಡಿಸಲು ಇರುವ ಸಮಸ್ಯೆಗಳೇನು? (ವಿವರ ಒದಗಿಸುವುದು) | ಸರ್ಕಾರದ ಆದೇಶ ಸಂಖ್ಯೆ: ಕಾಇ 45 ಇಟಿಐ 91, ಬೆಂಗಳೂರು, ದಿನಾಂಕ:15-11-1997 ರಲ್ಲಿ ರಾಷ್ಟ್ರೀಯ ವೃತ್ತಿ ತರಬೇತಿ ಪರಿಷತ್ತಿನಿಂದ (ಎನ್.ಸಿ.ವಿ.ಟಿ) 7 ವರ್ಷ ಅಥವಾ ಅದಕ್ಕೂ ಮೀರಿದಂತೆ ಸಂಯೋಜನೆ ಪಡೆದಿರುವ ಎಲ್ಲಾ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಭೋದಕ ಮತ್ತು ಭೋದಕೇತರ ಸಿಬ್ಬಂದಿಯವರಿಗೆ ಸಹಾಯಾನುದಾನ ನೀಡುವ ನಿಯಮದನ್ವಯ ಈ ಕೆಳಕಂಡ ಸರ್ಕಾರಿ ಆದೇಶಗಳಲ್ಲಿ ಒಟ್ಟು 196 ಸಂಸ್ಥೆಗಳನ್ನು ಅನುದಾನಕ್ಕೆ ಒಳಪಡಿಸಲಾಗಿರುತ್ತದೆ.<br>1) ಸರ್ಕಾರದ ಆದೇಶ ಸಂಖ್ಯೆ: ಕಾಇ 45 ಇಟಿಐ 91, ಬೆಂಗಳೂರು, ದಿನಾಂಕ: 15-11-1997.<br>2) ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಇಟಿಐ 2005 ಬೆಂಗಳೂರು, ದಿನಾಂಕ: 20-03-2007.<br>3) ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಇಟಿಐ 2005 ಬೆಂಗಳೂರು, ದಿನಾಂಕ: 21.08.2010.<br><br>ಸರ್ಕಾರದ ಆದೇಶ ಸಂಖ್ಯೆ: ಕಾಇ284 ಇಟಿಐ 2005 ಬೆಂಗಳೂರು, ದಿನಾಂಕ:21.08.2010 ರ ಆದೇಶದಲ್ಲಿ ಇನ್ನು ಮುಂದೆ ಯಾವುದೇ ಕೈಗಾರಿಕಾ ತರಬೇತಿ ಕೇಂದ್ರವನ್ನು 1997 ರ ಅನುದಾನ ಸಂಹಿತೆಗೆ ಒಳಪಡಿಸತಕ್ಕದ್ದಲ್ಲವೆಂದು ಷರತ್ತು ವಿಧಿಸಲಾಗಿದೆ. ಈ ಆದೇಶವನ್ನು ರಾಜ್ಯದ ಆರ್ಥಿಕ ಸ್ಥಿತಿಯನ್ನು ಆಧರಿಸಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿರುವುದರಿಂದ ರಾಜ್ಯದ ಯಾವುದೇ ಅನುದಾನ ರಹಿತ ಐ.ಟಿ.ಐ ತರಬೇತಿ ಕೇಂದ್ರಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶಗಳಿರುವುದಿಲ್ಲ. |

**ಸಂಖ್ಯೆ: ಕೌಉಜೀಇ 31 ಕೈತಪ್ರ 2022**

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು